ವೀಣಾ ಶೇಖರ್ *

# ದರಿಯಾ ದೌಲತ್ ಬಾಗ್‌ನ ವರ್ಣಚಿತ್ರಗಳ ಬಗ್ಗೆ ಕೆಲವು ಅನಿಸಿಕೆಗಳು

ಅಜಂತಾ, ಎಲ್ಲೋರಾ, ಬಾಘ್, ಬಾದಾಮಿಗಳಲ್ಲಿ ಕಾಣಬರುವ ಭಿತ್ತಿ ಚಿತ್ರಗಳ ಪರಂಪರೆಯಲ್ಲಿ ಆಗುತ್ತಿದ್ದ ಹಿಂಜರಿತವನ್ನು ದರಿಯಾ ದೌಲತ್‌ನ ಭಿತ್ತಿಚಿತ್ರಗಳಲ್ಲಿ ಗುರುತಿಸಬಹುದು. ಟಿಪ್ಪುವಿನ ಬೇಸಿಗೆ ಅರಮನೆಯ ಪೂರ್ವ ಮತ್ತು ಪಶ್ಚಿಮದ ಗೋಡೆಗಳ ಮೇಲೆ ಇರುವ ಚಿತ್ರಗಳು ವ್ಯಕ್ತಿಗಳ ಆಕೃತಿಗಳನ್ನು ಒಳಗೊಂಡು ಮೆಚ್ಚುಗೆ ಗಳಿಸುವ ಸ್ವರೂಪದವೂ, ಕೆಲಮಟ್ಟಿಗೆ ವಿಲಕ್ಷಣವಾದುವೂ, ಆಗಿವೆ.

ಪಶ್ಚಿಮದ ಭಿತ್ತಿಯಲ್ಲಿ ಬ್ರಿಟಿಷರ ವಿರುದ್ಧ ಟಿಪ್ಪು ಮತ್ತು ಹೈದರ್ ನಡೆಸಿದ ಖ್ಯಾತ ಪೊಲ್ಲುಯೂರ ಯುದ್ಧದ ದೃಶ್ಯವಿದೆ. ಪೂರ್ವದ ಗೋಡೆಗಳ ಮೇಲೆ ಉಲ್ಲೇಖಿಸಬಹುದಾದ ಚಿತ್ರಗಳಲ್ಲಿ ತಂಜಾವೂರಿನ ರಾಜ, ಮದಕರಿ ನಾಯಕ, ಕೃಷ್ಣರಾಜ ಒಡೆಯರ್ ಮುಂತಾದವರ ಚಿತ್ರಣವಿದೆ. ಇವು ಪಾಶ್ಚಾತ್ಯ ಶೈಲಿಯಲ್ಲಿ ರೇಖಿಸಲು ಮಾಡಿದ ಯತ್ನಗಳು. ಇದರಲ್ಲಿ ೩೦-೪೦ ರಾಜರ ಚಿತ್ರಗಳಿದ್ದು ಅವುಗಳಲ್ಲಿ ಕೆಲವನ್ನು ಮಾತ್ರ ಗುರುತಿಸಲು ಈವರೆಗೆ ಸಾಧ್ಯವಾಗಿದೆ. ಈ ರಾಜರ ಚಿತ್ರಗಳು ಟಿಪ್ಪುವಿನ ಜೊತೆ ದರ್ಬಾರಿನಲ್ಲಿದ್ದಾಗ ಮೂಡಿಸಿದವೆ ಅಥವಾ ಸುಲ್ತಾನನು ನೀಡಿದ ವರ್ಣನೆಯಿಂದಲೇ ಎಂಬುದು ಖಚಿತವಾಗಿಲ್ಲ. ಇದರಲ್ಲಿ ಕೆಲವರು ಟಿಪ್ಪುವಿನ ಮಿತ್ರರಲ್ಲದ್ದರಿಂದ ಆತನ ದರ್ಬಾರಿನಲ್ಲಿ ಬಂದಾಗ ಚಿತ್ರಿತರಾದವರೆಂದು ಹೇಳಲು ಬಾರದು. ಟಿಪ್ಪುವಿನ ವರ್ಣನಾಸಾಮರ್ಥ್ಯದಿಂದ ಬರೆದುವು ಇವೆಂದಾದರೆ ಅವುಗಳನ್ನು ಗುರುತಿಸುವ ಯತ್ನ ಸಂಶಯಾತೀತವಲ್ಲ.

ಇನ್ನೊಂದು ಸಮಸ್ಯೆ ಎಂದರೆ ಇಲ್ಲಿನ ವ್ಯಕ್ತಿ ಚಿತ್ರಗಳು ಕುಗ್ಗಿದ ಸ್ಥಳಾವಕಾಶದಿಂದ ಒಂದರ ಮೇಲೆ ಒಂದು ಎಂಬಂತೆ ಒತ್ತರದಲ್ಲಿ ಮೂಡಿ ಬಂದಿರುವುದು. ಕಲಾವಿದರಿಗೆ ಸಾಕಷ್ಟು ವಿಶಾಲವಾದ ಗೋಡೆ ಇದ್ದರೂ, ಈ ಈ ರೀತಿಯ ಚಿತ್ರಣದಿಂದ ಒಬ್ಬ ವ್ಯಕ್ತಿಯನ್ನು ನಮ್ಮ ಸ್ಮರಣ ಶಕ್ತಿಯ ಬಲದಿಂದ ಗುರುತಿಸಲು ಕಷ್ಟವಾಗುವುದು. ಬಹುಶಃ ದಕ್ಷಿಣ ಭಾರತದ ಇತಿಹಾಸದ ದೀರ್ಘ ಕಾಲಾವಧಿಯ ಸಂಗತಿಗಳನ್ನು ಮೂಡಿಸುವ ಒತ್ತಡ ಕಲಾವಿದರ ಮೇಲೆ ಬಿದ್ದುದೇ ಇದಕ್ಕೆ ಕಾರಣವಿರಬಹುದು.

ಇನ್ನೊಂದು ಕಲಾ ಸಮುದಾಯದಲ್ಲಿ ಇಬ್ಬರು ವ್ಯಕ್ತಿಗಳು ಸೈನ್ಯವೊಂದರ ಮುಂದಾಳುಗಳಾಗಿ ಸಾಗುವ ಚಿತ್ರಣವಿದೆ. ಒಬ್ಬ ವ್ಯಕ್ತಿಯ ಉಡುಪು ಮತ್ತು ರಾಜ ಸಮಾನ ನಿಲುವಿನಿಂದ ಆತನನ್ನು ಟಿಪ್ಪುವೆಂದು ಗುರುತಿಸಬಹುದಾದರೂ ಮುಖದ ಮೇಲಣ ವರ್ಣಗಳೆಲ್ಲ ಮಾಸಿವೆ. ಇಲ್ಲಿ ಟಿಪ್ಪು ಮಧ್ಯಮ ಎತ್ತರದ, ಮಧ್ಯಮ ತೂಕದ ಮತ್ತು ಮಧ್ಯಮ ವರ್ಣದ ವ್ಯಕ್ತಿಯಾಗಿ ಕಂಡುಬರುತ್ತಾನೆ. ಎಚ್ಚರಿಕೆಯಿಂದ ನೋಡಿದರೆ ಅವನ ಮುಖವನ್ನು ಪುನರ್ಲೇಖಿಸಲಾಗಿದ್ದು ತಿಳಿಯುತ್ತದೆ; ಮೂಲದಲ್ಲಿ ಅದರ ಸ್ವರೂಪ ಬೇರೆಯೇ ಇದ್ದೀತು. ಇಲ್ಲಿನ ವಸ್ತು ಸಂಗ್ರಹಾಲಯದಲ್ಲಿ ಇರುವ ಬ್ರಿಟಿಷ್ ಕಲಾವಿದರು ಬರೆದ ಆತನ ಎರಡು ತೈಲ ಚಿತ್ರಗಳನ್ನು ಕಂಡಲ್ಲಿ ರಾಜನ ಮೂರು ಭಿನ್ನ ಪ್ರತೀಕಗಳು ನಮಗೆ ದೊರೆತಂತಾಗುತ್ತದೆ.

ಜಾನ್ ಜೊಫ್ಘಾನಿ (Zoffany) ೧೭೮೦ರಲ್ಲಿ ಚಿತ್ರಿಸಿದ ಟಿಪ್ಪುವಿನ ವರ್ಣಚಿತ್ರದಲ್ಲಿ ಆತನು ರಾಜನಾಗಿ,

* ಸಂಶೋಧನಾ ವಿದ್ಯಾರ್ಥಿನಿ, ಚಿತ್ರಕಲಾ ಪರಿಷತ್, ಬೆಂಗಳೂರು.

ದೀರ್ಘಕಾಯನಾಗಿ, ಕಂದು ಮೈಬಣ್ಣದವನಾಗಿ ಹಾಗೂ ಪ್ರಬುದ್ಧ ದೃಷ್ಟಿಯವನಾಗಿ ಕಾಣುತ್ತಾನೆ. ಆದರೆ ಚೆರ್ರಿ ರೇಖಿಸಿದ ಎದೆಮಟ್ಟದ ಚಿತ್ರದಲ್ಲಿ ಆತ ಕುಬ್ಜ, ಕಪ್ಪು ಬಣ್ಣದವನು ಹಾಗೂ ದಪ್ಪದ ದೇಹದವನಾಗಿ ಮೂಡಿದ್ದಾನೆ. ಇದರಿಂದ ಟಿಪ್ಪುವಿನ ವ್ಯಕ್ತಿತ್ವ ಏನಿತ್ತೆಂದು ನಿರ್ಣಯಿಸುವುದು ಕಠಿಣವಾಗುತ್ತದೆ.

ಯುದ್ಧದ ಚಿತ್ರಣ ನೀಡುವ ಭಿತ್ತಿಚಿತ್ರ ಭಾರತದಲ್ಲೇ ವಿಶಾಲವಾದುದು. ಇದ್ದ ವರ್ಣಗಳು ಮಾಸಿ ಹಲವು ಬಾರಿ ಅವನ್ನು ಪುನಃ ರೇಖಿಸಲಾಗಿದೆ. ಪ್ರತೀಬಾರಿ ಕೆಲವು ವಿವರಗಳನ್ನು ಕೈಬಿಟ್ಟಿದೆ. ಇಲ್ಲವೇ ಬದಲಾಯಿಸಿದೆ. ಇದರಲ್ಲಿ ಹಲವು ವ್ಯಕ್ತಿಗಳ ಚಿತ್ರವನ್ನೂ ಬದಲಾಯಿಸಿದ ಬಗ್ಗೆ ಸಾಕ್ಷ್ಯವಿದೆ. ೧೮೦೪ರಲ್ಲಿ ಲಾರ್ಡ್ ವಲೆನ್‌ಶಿಯಾ (Valentia) ಅದನ್ನು ಕಂಡಿದ್ದು ಅದರಲ್ಲಿ ಟಿಪ್ಪುವು ದ್ವೇಷಿಸುತ್ತಿದ್ದ ಆಂಗ್ಲ ವ್ಯಕ್ತಿಯೊಬ್ಬ ಮಹಿಳೆಯೊಬ್ಬಳ ವಿರುದ್ಧ ಖಡ್ಗ ಹಿರಿಯುವ ದೃಶ್ಯವಿತ್ತು. ಕರ್ನಲ್ ವಾಲ್ಟರ್ ಕ್ಯಾಂಪ್‌ಬೆಲ್ ಕೆಲವು ವಿವರಗಳನ್ನು ನೀಡಿದ್ದು ಅವು ಮಾಯವಾಗಿದೆ. ಸ್ಥಳೀಯ ಸೇವಕರು ಒಂದು ಕೈಯಲ್ಲಿ ಚಹಾದಾನಿಯನ್ನು, ಇನ್ನೊಂದರಲ್ಲಿ ಬ್ರ್ಯಾಂಡಿಯ ಸೀಸೆಗಳನ್ನೂ ಒಯ್ಯುತ್ತಿದ್ದ ಚಿತ್ರಗಳನ್ನು ಕಂಡಿದ್ದಾಗಿ ಆತ ಬರೆದಿದ್ದ. ಇಂಥ ಯಾವ ವಿವರಗಳೂ ಅಲ್ಲಿನ ವರ್ಣಚಿತ್ರಗಳಲ್ಲಿ ಇಲ್ಲ. ಮುಖ್ಯವಾದ ವಿಷಯವೆಂದರೆ ಬೇರೆ ಬೇರೆ ಕಲಾವಿದರು ಈ ಚಿತ್ರಗಳ ರಚನೆಗೆ ಕೈಯಾಡಿಸಿದ್ದು. ಮೊದಲು ಟಿಪ್ಪುವಿನ ಆಶ್ರಯದಲ್ಲಿ ಸ್ಥಳೀಯ ಚಿತ್ರಕಾರರು ಇವುಗಳನ್ನು ರೇಖಿಸಿದರು. ಮುಂದೆ ಆತನೇ ಅವುಗಳಲ್ಲಿ ಹಲವು ಬದಲಾವಣೆಗಳನ್ನು ಮಾಡಿಸಿದ. ಆಗ ಅವನಲ್ಲಿ ಇದ್ದ ಫ್ರೆಂಚ್ ಕಲಾವಿದರು ಈ ಕೆಲಸ ಮಾಡಿರಬೇಕು. ಬ್ರಿಟಿಷರು ಶ್ರೀರಂಗ ಪಟ್ಟಣವನ್ನು ಗೆದ್ದಾಗ ಅವರು ಅವುಗಳಲ್ಲಿನ ಹಲವು ಅಂಶಗಳನ್ನು ಮಾರ್ಜಿಸಿ ದಂತಿದ್ದು ಅದನ್ನು ಆಂಗ್ಲ ಕಲಾವಿದರೇ ಮಾಡಿರಬಹುದು. ಅವುಗಳಲ್ಲಿನ ಕೆಲವು ಚಿತ್ರಗಳ ಬಣ್ಣಗೆಡುತ್ತ ಸಾಗಲು ಅವುಗಳ ರಕ್ಷಣಾರ್ಥವಾಗಿ ಕೇಂದ್ರ ಪುರಾತತ್ತ್ವ ಇಲಾಖೆ ಅವುಗಳನ್ನು ಮತ್ತೆ ತಿದ್ದಿಸಿದೆ. ಇದರಿಂದ ಈ ವರ್ಣ ಚಿತ್ರಗಳು ಶ್ರೀರಂಗಪಟ್ಟಣ ಕಲಾವಿದರ ಕೌಶಲ್ಯದ ಮೂಲ ಮೌಲ್ಯಕ್ಕೆ ಎರವಾಗಿ ಪುರಾತನತೆಯ ಮೌಲ್ಯಗಳನ್ನು ಕಳಕೊಂಡವು; ಇದರಿಂದ ಅವುಗಳಲ್ಲಿ ಸೂಕ್ತ ಪ್ರಮಾಣ ಬದ್ಧತೆ ಮತ್ತು ಸಮ್ಯಕ್ ದರ್ಶನ ದೊರೆಯದಂತೆ ಆಯಿತು.

ದರಿಯಾದೌಲತ್ ಕಟ್ಟಡದ ಭೌತಿಕ ಚೌಕಟ್ಟಿಗೂ ಅಲ್ಲಿನ ಹವಾಮಾನದ ಏರು ಪೇರುಗಳಿಂದ ಪರಿಣಾಮವಾಗಿದೆ. ಸೂರ್ಯನ ಕಿರಣಗಳು ನೇರವಾಗಿ ಅವುಗಳ ಮೇಲೆ ಬಿದ್ದುದರಿಂದ ವರ್ಣಚಿತ್ರಗಳಿಗೆ ಘಾಸಿಯಾಗಿದೆ. ಇದರ ಉಷ್ಣದಿಂದ ವರ್ಣಗಳ ಮೇಲೆ ಪ್ರತಿಕ್ರಿಯೆಯಾಗಿ ಕೆಲವು ಮಸುಕಾಗುತ್ತ ಸಾಗಿದರೆ ಕೆಲವು ವರ್ಣದ ಪದರುಗಳು ಕಿತ್ತು ಬಂದಿವೆ. ವಸ್ತು ಸಂಗ್ರಹಾಲಯ ಸ್ಥಾಪನೆ ಇತ್ತೀಚೆಗಾಯಿತು; ಇದಕ್ಕೂ ಮೊದಲು ವರ್ಣಚಿತ್ರ ಸಂಪದ ಬಹಳಷ್ಟು ನಷ್ಟವಾಗಿದೆ. ಅನಾಗರಿಕ ಕ್ರಿಯೆಗಳಿಂದ ಇಲ್ಲಿನ ಚಿತ್ರಗಳು ಹಾಳಾದಂತೆ ಇವೆ. ಸಂದರ್ಶಕರು ತಮಗೆ ಮೆಚ್ಚಿಗೆಯಾಗದ ವ್ಯಕ್ತಿಗಳ ಚಿತ್ರಗಳನ್ನೂ ಮುಖಗಳನ್ನೂ ಕೆರೆದು ತೆಗೆದಂತಿದೆ. ಟಿಪ್ಪುವಿನ ಅಧಿಕಾರಿಯಾಗಿದ್ದ ಮೀರ್ ಸಾದಿಕನ ಚಿತ್ರ ಇದಕ್ಕೆ ಒಳ್ಳೆಯ ಮಾದರಿ. ಅವನ ಮುಖವನ್ನು ಮತ್ತೆ ಮತ್ತೆ ಕೆರೆದುದರಿಂದ ಹಿಂದಿನ ಹೇಳಿಕೆಗಳಿಂದಷ್ಟೇ ಅವನ ಚಿತ್ರವನ್ನು ಗುರುತಿಸಬಹುದು. ಆ ಚಿತ್ರದ ದುರಸ್ತಿಗಾರರು ಆ ಕಲೆಯ ಅಸ್ವಾನ್ವಯವಾಗುವುದನ್ನು ತಪ್ಪಿಸಲು ಅಂಥ ಭಾಗಗಳನ್ನು ಹಾಗೇ ಬಿಡುತ್ತಾರೆ.

ವರ್ಣಚಿತ್ರಗಳಿಗೆ ಸೌಂದರ್ಯದ ದೃಷ್ಟಿಗಿಂತ ಐತಿಹಾಸಿಕ ದೃಷ್ಟಿಯಿಂದ ವಿಶೇಷ ಮಹತ್ವವಿದೆ. ಅವುಗಳು ಸಾಮಾಜಿಕ ಇಲ್ಲವೇ ಧಾರ್ಮಿಕ ವಸ್ತುಗಳದ್ದಾಗಿರದೆ ರಾಜಕೀಯ ವಿಚಾರಗಳನ್ನು ಒಳಗೊಂಡವುಗಳಾಗಿರುವುದೇ ಈ ಅನನ್ಯ ಮಹತ್ವಕ್ಕೆ ಕಾರಣ.

ದರಿಯಾ ದೌಲತ್ ಬಗ್ಗೆ ಬರೆದ ಕೃತಿಗಳು ಬಹಳವಿಲ್ಲ. ಅವುಗಳ ಒಂದು ಸಮಗ್ರ ಮತ್ತು ಸವಿವರ ಅಧ್ಯಯನ ಅವುಗಳು ನಶಿಸುತ್ತಿರುವ ಈ ಕಾಲದಲ್ಲಿ ನಡೆಯುವುದು ಅನಿವಾರ್ಯ. ಟಿಪ್ಪು ಹೊಂದಿದ್ದ ಅಪಾರ ಸಂಪತ್ತಿನಲ್ಲಿ ಈಗ ಉಳಿದಿರುವ ಸಂಪತ್ಭಂಡಾರಗಳೆಂದರೆ ಇವೇ. ಉಳಿದ ಈ ಚಿತ್ರಸಂಪತ್ತಿನ ರಕ್ಷಣೆ, ದಾಖಲೀಕರಣ ಮತ್ತು ಅತಿ ಎಚ್ಚರಿಕೆಯ ಪರಿಪಾಲನೆ ಅತ್ಯವಶ್ಯ ತುರ್ತುಕ್ರಮವಾಗಿದ್ದು ಇಲ್ಲವಾದಲ್ಲಿ ಅವು ಅಂಧಕಾರದ ಪರಿಧಿಗೆ ತಳ್ಳಲ್ಪಟ್ಟು ಮುಂದೆ ಪೂರ್ತಿ ಇಲ್ಲದಂತೆ ಆಗಬಹುದು.

○